# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆಸಂಖ್ಯೆ : 741
2. ಸದಸ್ಯರ ಹೆಸರು : ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ
3. ಉತ್ತರಿಸುವ ಸಚಿವರು : ತೋಟಗಾರಿಕೆ ಸಚಿವರು
4. ಉತ್ತರಿಸಬೇಕಾದ ದಿನಾಂಕ : 17-12-2018

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದ ಉತ್ತರ ಕರ್ನಾಟಕ ಭಾಗದಲ್ಲಿ ಅತಿ ಹೆಚ್ಚು ತೋಟಗಾರಿಕೆ ಬೆಳೆಗಳನ್ನು ಬೆಳೆಯುತ್ತಿದ್ದು, ಬೆಳೆದ ಫಸಲಿಗೆ ಬಹಳ ಸಂದರ್ಭದಲ್ಲಿ ನ್ಯಾಯ ಸಮ್ಮತ ಬೆಲೆ ಸಿಗದೆ ರೈತರು ಸಮಸ್ಯೆಗಳನ್ನು ಎದುರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ. |
| ಆ | ಈ ಭಾಗದಲ್ಲಿ ಕಳೆದ 3 ವರ್ಷದ ಅವಧಿಯಲ್ಲಿ ತೋಟಗಾರಿಕೆ ಬೆಳೆಗಳಾದ ದ್ರಾಕ್ಷಿ, ದಾಳಿಂಬೆ, ಸಪೋಟ ಹಾಗೂ ಇತರೆ ಬೆಳೆಗಳ ಉತ್ಪಾದನೆಯ ಪ್ರಮಾಣದ ಮಾಹಿತಿ ಒದಗಿಸುವುದು; | ರಾಜ್ಯದ ಉತ್ತರ ಕರ್ನಾಟಕ ಭಾಗದಲ್ಲಿ ಕಳೆದ 3 ವರ್ಷದ ಅವಧಿಯಲ್ಲಿ ತೋಟಗಾರಿಕೆ ಬೆಳೆಗಳಾದ ದ್ರಾಕ್ಷಿ, ದಾಳಿಂಬೆ, ಸಪೋಟ ಹಾಗೂ ಇತರೆ ಬೆಳೆಗಳ ಉತ್ಪಾದನೆಯ ಪ್ರಮಾಣದ ಮಾಹಿತಿಯು ಈ ಕೆಳಕಂಡಂತಿದೆ. |

ಉತ್ಪಾದನೆ: ಲಕ್ಷ ಮೆಟ್ರಿಕ್ ಟನ್ನುಗಳಲ್ಲಿ

| ವರ್ಷವಾರು | ದ್ರಾಕ್ಷಿ | ದಾಳಿಂಬೆ | ಸಪೋಟ | ಇತರ ಹಣ್ಣಿನ | ಉತ್ತರ ಕರ್ನಾಟಕ ಭಾಗದ ಒಟ್ಟಾರೆ |
|---|---|---|---|---|---|
| 2014-15 | 3.13 | 0.84 | 1.16 | 17.56 | 22.69 |
| 2015-16 | 3.07 | 1.16 | 1.09 | 17.26 | 22.58 |
| 2016-17 | 3.40 | 1.34 | 0.98 | 19.20 | 24.93 |
| ಒಟ್ಟು | 9.60 | 3.34 | 3.23 | 54.02 | 70.20 |

<table>
<tr>
<td>ಇ</td>
<td>ಈ ಒಟ್ಟು ಉತ್ಪಾದನೆಯಲ್ಲಿ ಸ್ಥಳೀಯವಾಗಿ ಉಪಯೋಗಿಸಿದ, ಹೊರ ರಾಜ್ಯಗಳಿಗೆ ಹಾಗೂ ಹೊರ ರಾಷ್ಟ್ರಗಳಿಗೆ ಮಾರಾಟ ಮಾಡಲಾದ ಪ್ರಮಾಣದ ಬೆಲೆಯ 3 ವರ್ಷದ ಮಾಹಿತಿ ಒದಗಿಸುವುದು.</td>
<td>ಕರ್ನಾಟಕದಿಂದ ಕಳೆದ ಮೂರು ವರ್ಷಗಳಲ್ಲಿ ಹೊರ ರಾಷ್ಟ್ರಗಳಿಗೆ ತೋಟಗಾರಿಕೆ ಉತ್ಪನ್ನಗಳನ್ನು ರಫ್ತು ಮಾಡಲಾದ ಉತ್ಪನ್ನದ ಮೌಲ್ಯವು ರೂ.1,211.03 ಕೋಟಿಗಳಿದ್ದು, ವರ್ಷವಾರು ವಿವರಗಳು ಈ ಕೆಳಕಂಡಂತಿದೆ.
<table>
<tr><th>ಕ್ರಮ ಸಂ.</th><th>ವರ್ಷ</th><th>ರಫ್ತು ಮಾಡಲಾದ ತೋಟಗಾರಿಕೆ ಉತ್ಪನ್ನಗಳ ಒಟ್ಟು ಮೌಲ್ಯ (ರೂ. ಕೋಟಿಗಳಲ್ಲಿ)</th></tr>
<tr><td>1.</td><td>2016-17</td><td>497.51</td></tr>
<tr><td>2.</td><td>2017-18</td><td>478.51</td></tr>
<tr><td>3.</td><td>2018-19</td><td>235.01</td></tr>
<tr><td colspan="2">ಒಟ್ಟು</td><td>1211.03</td></tr>
</table>
(ಮೂಲ: ವಿಶ್ವೇಶ್ವರಯ್ಯ ವ್ಯಾಪಾರ ಉತ್ತೇಜನ ಕೇಂದ್ರ (VTPC)<br>
ಒಟ್ಟು ಉತ್ಪಾದನೆಯಲ್ಲಿ ಸ್ಥಳೀಯವಾಗಿ ಉಪಯೋಗಿಸಿದ ಹಾಗು ಹೊರ ರಾಜ್ಯಗಳಿಗೆ ಸರಬರಾಜು ಆಗಿರುವ ಉತ್ಪನ್ನಗಳ ಪ್ರಮಾಣದ ಅಂಕಿ ಅಂಶಗಳ ಮಾಹಿತಿ ಲಭ್ಯವಿರುವುದಿಲ್ಲ.</td>
</tr>
<tr>
<td>ಈ</td>
<td>ಈ ಫಸಲನ್ನು ಮಾರಾಟ ಮಾಡುವಾಗ ಮಧ್ಯವರ್ತಿಗಳಿಂದ ಬೆಳೆಗಾರರಿಗೆ ಆಗುವ ಹಾನಿಯನ್ನು ತಪ್ಪಿಸಲು, ನ್ಯಾಯ ಸಮ್ಮತ ಬೆಲೆ ಒದಗಿಸಲು ಹಾಗೂ ಈ ಹಣ್ಣುಗಳ ಸಂಸ್ಕರಣ ಕೇಂದ್ರಗಳನ್ನು ಸ್ಥಾಪಿಸಲು ಸರ್ಕಾರ ಏನು ಕ್ರಮ ಕೈಗೊಳ್ಳದೆ?</td>
<td>ತೋಟಗಾರಿಕೆ ಬೆಳೆಗಳನ್ನು ಮಾರಾಟ ಮಾಡುವಾಗ ಮಧ್ಯವರ್ತಿಗಳಿಂದ ಬೆಳೆಗಾರರಿಗೆ ಆಗುವ ಹಾನಿಯನ್ನು ತಪ್ಪಿಸಲು, ನ್ಯಾಯ ಸಮ್ಮತ ಬೆಲೆ ಒದಗಿಸಲು ಸರ್ಕಾರ ಈ ಕೆಳಕಂಡಂತೆ ಕ್ರಮಗಳನ್ನು ಕೈಗೊಂಡಿರುತ್ತದೆ.<br>
1. ತೋಟಗಾರಿಕೆ ಇಲಾಖೆಯ ಅಂಗ ಸಂಸ್ಥೆಯಾದ ಹಾಪ್ ಕಾಮ್ಸ್ ಸಂಸ್ಥೆಯ ಮೂಲಕ ಸದಸ್ಯ ರೈತರಿಂದ ನೇರವಾಗಿ ತೋಟಗಾರಿಕೆ ಉತ್ಪನ್ನಗಳನ್ನು ನ್ಯಾಯಯುತ ಬೆಲೆಯಲ್ಲಿ ಖರೀದಿಸಿ ಗ್ರಾಹಕರಿಗೆ ಹಾಪ್ ಕಾಮ್ಸ್ ಕೇಂದ್ರಗಳ ಮುಖಾಂತರ ಮಾರಾಟ ಮಾಡಲು ಕ್ರಮವಹಿಸಲಾಗುತ್ತಿದೆ.<br>
2. ಮಾವು ಅಭಿವೃದ್ಧಿ ಮಂಡಳಿ, ದ್ರಾಕ್ಷರಸ ಮಂಡಳಿ, ಲಿಂಬೆ ಮಂಡಳಿ, ಮತ್ತು ಸಾಂಬಾರು ಮಂಡಳಿಗಳ ಮುಖಾಂತರ ಮೇಳಗಳು, ಸ್ಥಳೀಯ ಮಾರುಕಟ್ಟೆ ಮತ್ತು ವಿದೇಶಿ ರಫ್ತು ಮಾರುಕಟ್ಟೆ ವ್ಯವಸ್ಥೆಗೆ ಅವಕಾಶ ಕಲ್ಪಿಸಿಕೊಡಲಾಗುತ್ತಿದೆ.<br>
3. ಕೆಪೆಕ್, ಅಪೆಡಾ, ಕರ್ನಾಟಕ ಕೃಷಿ ವ್ಯವಹಾರ ಅಭಿವೃದ್ಧಿ ಮಂಡಳಿ (ಕೆಎಬಿಡಿಸಿ), ಅಂತರಾಷ್ಟ್ರೀಯ ಪುಷ್ಪ ಹರಾಜು ಕೇಂದ್ರ (IFAB) ಮುಖಾಂತರ ರಫ್ತು ಮಾರುಕಟ್ಟೆ ವ್ಯವಸ್ಥೆಗೆ ಅವಕಾಶ ಕಲ್ಪಿಸಿಕೊಡಲಾಗುತ್ತಿದೆ.<br>
4. ರೈತ ಉತ್ಪಾದಕ ಸಂಸ್ಥೆ (FPO)ಯ ಮೂಲಕ ರೈತ ಸದಸ್ಯರು ಬೆಳೆದ ಉತ್ಪನ್ನಗಳಿಗೆ ಮುಕ್ತ ಮಾರುಕಟ್ಟೆ ವ್ಯವಸ್ಥೆಯನ್ನು ಕಲ್ಪಿಸಲಾಗಿರುತ್ತದೆ.<br>
5. ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ಸಮಗ್ರ ತೋಟಗಾರಿಕೆ ಅಭಿವೃದ್ಧಿ ಯೋಜನೆ (PPP-IHD) ಯಡಿ ರೈತರು ಬೆಳೆಯುವ ಬೆಳೆಗಳಿಗೆ ಸೂಕ್ತ ಮಾರುಕಟ್ಟೆ ಒದಗಿಸಲು ಗ್ರಾಮಮಟ್ಟದಲ್ಲಿ ರೈತರನ್ನೊಳಗೊಂಡ</td>
</tr>
</table>

| | | |
|---|---|---|
| | | ಗುಂಪುಗಳನ್ನು ರಚಿಸಿ, ನೇರವಾಗಿ ರೈತರಿಂದ ಖರೀದಿಸಿ ಖಾಸಗಿ ಸಹಭಾಗಿತ್ವದಡಿ ವಿದೇಶಗಳಿಗೆ ರಫ್ತು ಮಾಡಲಾಗುತ್ತಿದೆ.<br>ಹಣ್ಣುಗಳನ್ನು ಮತ್ತು ಇತರೆ ತೋಟಗಾರಿಕೆ ಬೆಳೆಗಳನ್ನು ಸಂಸ್ಕರಣೆಗೆ ಉತ್ತೇಜಿಸಲು ಸರ್ಕಾರದ ವತಿಯಿಂದ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ.<br>1. ರಾಷ್ಟ್ರೀಯ ಕೃಷಿ ವಿಕಾಸ ಯೋಜನೆಯಡಿ ತೋಟಗಾರಿಕೆಯಲ್ಲಿ ಕೊಯ್ಲೋತ್ತರ ನಿರ್ವಹಣೆ ಚಟುವಟಿಕೆಗಳಿಗೆ ಪ್ರೋತ್ಸಾಹ ಕಾರ್ಯಕ್ರಮ.<br>• ಪ್ರಾಥಮಿಕ ಸಂಸ್ಕರಣಾ ಘಟಕಗಳಿಗೆ ಶೇ. 40 ರಂತೆ ಗರಿಷ್ಟ ಒಟ್ಟು ಘಟಕ ವೆಚ್ಚ ರೂ 25.00 ಲಕ್ಷಗಳಿಗೆ ಗರಿಷ್ಟ ರೂ. 10.00 ಲಕ್ಷಗಳವರೆಗೆ ಸಹಾಯಧನ ನೀಡಲಾಗುತ್ತಿದೆ.<br>• ಸಂಸ್ಕರಣಾ ಮತ್ತು ಮೌಲ್ಯವರ್ದನ ಘಟಕಗಳಿಗೆ ಶೇ. 25 ರಂತೆ ಗರಿಷ್ಟ ಒಟ್ಟು ಘಟಕ ವೆಚ್ಚ ರೂ 200.00 ಲಕ್ಷಗಳಿಗೆ ಗರಿಷ್ಟ ರೂ. 50.00 ಲಕ್ಷಗಳವರೆಗೆ ಸಹಾಯಧನ ನೀಡಲಾಗುತ್ತಿದೆ.<br>• ಪ್ಯಾಕ್ ಹೌಸ್ ಘಟಕಕ್ಕೆ ಶೇ. 50 ರಂತೆ ಒಟ್ಟು ಘಟಕ ವೆಚ್ಚ ರೂ 4.00 ಲಕ್ಷಗಳಿಗೆ ಗರಿಷ್ಟ ರೂ. 2.00 ಲಕ್ಷಗಳವರೆಗೆ ಸಹಾಯಧನ ನೀಡಲಾಗುತ್ತಿದೆ.<br>2. ಸಮಗ್ರ ತೋಟಗಾರಿಕ ಅಬಿವೃದ್ಧಿ ಯೋಜನೆಯಡಿ ಕೇಂದ್ರ ಸರ್ಕಾರದ ಯೋಜನೆಗಳಾದ NHM/NHB/CDB ವತಿಯಿಂದ ಶೇ.40 ರಷ್ಟು ಸಹಾಯಧನ ಪಡೆದ ಪ್ರಾಥಮಿಕ ಸಂಸ್ಕರಣಾ ಘಟಕಗಳಿಗೆ, ಕೇಂದ್ರ ಹಾಗೂ ರಾಜ್ಯ ಸರ್ಕಾರದ ಒಟ್ಟು ಸಹಾಯಧನ ಸೇರಿ ಶೇ.50 ರಷ್ಟು ಮೀರದಂತೆ ಗರಿಷ್ಠ ರೂ.10.00 ಲಕ್ಷಗಳವರೆಗೆ ಸಹಾಯಧನ ನೀಡಲಾಗುತ್ತಿದೆ.<br>3. ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ<br>• ಸಮಗ್ರ ಸಂಸ್ಕರಣಾ ಘಟಕಗಳಿಗೆ ಶೇ. 35 ರಂತೆ ಗರಿಷ್ಟ ಒಟ್ಟು ಘಟಕ ವೆಚ್ಚ ರೂ 145.00 ಲಕ್ಷಗಳಿಗೆ ಗರಿಷ್ಟ ರೂ. 50.75 ಲಕ್ಷಗಳವರೆಗೆ ಸಹಾಯಧನ ನೀಡಲಾಗುತ್ತಿದೆ.<br>• ಸಮಗ್ರ ಪ್ಯಾಕ್ ಹೌಸ್ ಘಟಕಕ್ಕೆ ಶೇ. 35 ರಂತೆ ಒಟ್ಟು ಘಟಕ ವೆಚ್ಚ ರೂ 50.00 ಲಕ್ಷಗಳಿಗೆ ಗರಿಷ್ಟ ರೂ. 17.50 ಲಕ್ಷಗಳವರೆಗೆ ಸಹಾಯಧನ ನೀಡಲಾಗುತ್ತಿದೆ. |

ಸಂಖ್ಯೆ: ತೋಇ 432 ತೋಇವಿ 2018

(ಎಂ.ಸಿ. ಮನಗೂಳಿ)

ತೋಟಗಾರಿಕೆ ಸಚಿವರು